ಕರ್ನಾಟಕ ವಿಧಾನ ಪರಿಷತ್ತು
145ನೇ ಅಧಿವೇಶನ -2021

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ. | | 128 |
| ಮಾನ್ಯ ಸದಸ್ಯರ ಹೆಸರು | | ಶ್ರೀ ಬಿ.ಕೆ.ಹರಿಪ್ರಸಾದ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ಸಚಿವರು | | ಮಾನ್ಯ ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |
| ಉತ್ತರಿಸಬೇಕಾದ ದಿನಾಂಕ | | 13.12.2021 |
| ಪ್ರಶ್ನೆ | | ಉತ್ತರ |
| ಅ | ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದಂತೆ, 2020-21ನೇ ಸಾಲಿನಲ್ಲಿ ನಕಲಿ ಅಂಕಪಟ್ಟಿ ಹಗರಣ ನಡೆದಿದ್ದು, ಸರ್ಕಾರದ ಗಮನಕ್ಕೆ ಬಂದಿದಿಯೇ; | ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದಂತೆ ನಡೆದಿದೆ ಎನ್ನಲಾದ ನಕಲಿ ಅಂಕಪಟ್ಟಿ ಹಗರಣಗಳನ್ನೊಳಗೊಂಡ ಮೂರು ಪ್ರಕರಣಗಳನ್ನು ವಿಶ್ವವಿದ್ಯಾಲಯದಿಂದ ಸರ್ಕಾರದ ಗಮನಕ್ಕೆ ತರಲಾಗಿದೆ. ಈ ಪ್ರಕರಣಗಳ ವಿವರಗಳನ್ನು ಕೆಳಕಂಡಂತೆ ಸಾರಸಂಗ್ರಹಿಸಲಾಗಿದೆ.<br>1) ಕರ್ನಾಟಕ ವಿಧಾನಸಭೆ ಸಚಿವಾಲಯದಲ್ಲಿ ಉಪ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ ಅಧಿಕಾರಿಯೊಬ್ಬರ ಕಾನೂನು ಪದವಿ ಪ್ರಮಾಣ ಪತ್ರಗಳು ಹಾಗೂ ಅಂಕಪಟ್ಟಿಗಳ ಖಚಿತತ್ವದ ಕುರಿತು ಪರಿಶೋಧನೆ ನಡೆಸಿದಾಗ ನೈಜತೆಯಿಂದ ಕೂಡಿರದ ಬಗ್ಗೆ ದೃಢಪಟ್ಟ ಹಿನ್ನೆಲೆಯಲ್ಲಿ ಸದರಿ ಶೈಕ್ಷಣಿಕ ದಾಖಲೆಗಳನ್ನು ಬೆಂಗಳೂರು ವಿಶ್ವವಿದ್ಯಾಲಯದ ವಶಕ್ಕೆ ಪಡೆದು, ಈ ಹಗರಣದ ಕುರಿತು ಜ್ಞಾನಭಾರತಿ ಪೋಲೀಸ್ ಠಾಣೆಯಲ್ಲಿ ದಾಖಲಿಸಲಾದ ದೂರು ಪ್ರಕರಣಕ್ಕೆ ಸಂಬಂಧಿಸಿದಂತೆ, **4th Addl.CMM Court, Nrupatunga Road, Bangalore** ಇಲ್ಲಿ ಪ್ರಥಮ ವರ್ತಮಾನ ವರದಿಯನ್ನು ದಾಖಲಿಸಲಾಗಿದೆ.<br>2) ದಿನಾಂಕ:30.11.2021ರಂದು ಅಮೃತಹಳ್ಳಿ ಪೋಲೀಸ್ ಠಾಣೆಯ ಠಾಣಾಧಿಕಾರಿಗಳಿಂದ ಸಲ್ಲಿಸಲಾದ ಕೋರಿಕೆ ಪ್ರಸ್ತಾವನೆಯಂತೆ, ಕು.ಸುನೀಲ್‌ಕುಮಾರ್ ಎ..ಎಂ ಇವರು 2006ನೇ ಸಾಲಿನಲ್ಲಿ ಬರೆದ ಬಿ.ಸಿ.ಎ. ವ್ಯಾಸಂಗಕ್ರಮದ 1ನೇ ಸೆಮಿಸ್ಟರ್ ಪರೀಕ್ಷೆಯ ಒಂದು ಅಂಕಪಟ್ಟಿ ಹಾಗೂ 2004-2006ನೇ ಸಾಲಿಗಳ ಅವಧಿಯಲ್ಲಿ ಕು.ಶ್ರೀನಿವಾಸ್ ರಾಜು ವೇಗೆಸನಾ ಇವರು ಬರೆದ ಬಿ.ಸಿ.ಎ. ವ್ಯಾಸಂಗಕ್ರಮದ 1 ರಿಂದ 4 ಸೆಮಿಸ್ಟರ್ ಪರೀಕ್ಷೆಗಳ ನಾಲ್ಕು ಅಂಕಪಟ್ಟಿಗಳನ್ನು ಬೆಂಗಳೂರು ವಿಶ್ವವಿದ್ಯಾಲಯದಿಂದ ಪರಿಶೋಧನೆಗೆ |

| | | |
|---|---|---|
| | | ಒಳಪಡಿಸಿದಾಗ, ಸದರಿ ಶೈಕ್ಷಣಿಕ ದಾಖಲೆಗಳು ನಕಲಿ/ಕೃತ್ರಿಮ ಎಂದು ಸಾಬೀತಾಗಿರುತ್ತದೆ. ಈ ಬಗ್ಗೆ ಅಮೃತಹಳ್ಳಿ ಪೋಲೀಸ್ ಠಾಣೆಗೆ ವಿಶ್ವವಿದ್ಯಾಲಯದಿಂದ ವರದಿ ಮಾಡಲಾಗಿದೆ.<br><br>ಪೂರ್ವಪ್ರಸ್ತಾಪಿತ ನಕಲಿ ಅಂಕಪಟ್ಟಿ ಹಗರಣಗಳಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಹಾಗೂ ಸರ್ಕಾರದ ಅಧಿಕಾರಿ/ನೌಕರರ ಪಾತ್ರವಿರದೇ, ಹೊರಗಿನ ವ್ಯಕ್ತಿಗಳಿಂದ ಅಂಕಪಟ್ಟಿ ಕೃತ್ರಿಗೊಳಿಸಿರುವ ಕೃತ್ಯವನ್ನು ಎಸಗಲಾಗಿದೆ. |
| ಆ | ಬಂದಿದ್ದಲ್ಲಿ, ಈ ಕುರಿತಂತೆ ತನಿಖೆಯ ಪ್ರಗತಿ ಯಾವ ಹಂತದಲ್ಲಿ;(ಮಾಹಿತಿ ಒದಗಿಸುವುದು) | ಬೆಂಗಳೂರು ವಿಶ್ವವಿದ್ಯಾಲಯದ ಹೊರಗಿನ ದುಷ್ಟಕೂಟದಿಂದ ಎಸಗಲಾಗಿರುವ ಈ ಪ್ರಕರಣಗಳ ಬಗ್ಗೆ ತನಿಖೆಯು ಪ್ರಗತಿಯಲ್ಲಿದ್ದು, ಈ ಹಗರಣಗಳಲ್ಲಿ ಕೈವಾಡವಿರುವ ಕುರಿತು ತನಿಖೆಯಿಂದ ಸಾಬೀತಾಗುವ ವ್ಯಕ್ತಿಗಳ ವಿರುದ್ಧ ಕಠಿಣ ಶಿಸ್ತು ಕ್ರಮ ಜರುಗಿಸುವುದು ಅಗತ್ಯವಾಗುತ್ತದೆ. |
| ಇ | ಬೆಂಗಳೂರು ವಿಶ್ವವಿದ್ಯಾಲಯದ ಅಂಕಪಟ್ಟಿ ಹಗರಣಕ್ಕೆ ಸಂಬಂಧಿಸಿದಂತೆ ಆರೋಪಿತ ಅಧಿಕಾರಿ ನೌಕರರ ಮೇಲೆ ಶಿಸ್ತು ಕ್ರಮ ಜರಿಗಿಸಲಾಗಿದೆಯೇ; ಜರುಗಿಸಿದ್ದಲ್ಲಿ, ಈ ಕುರಿತಂತೆ ಸಂಪೂರ್ಣ ಮಾಹಿತಿ ಒದಗಿಸುವುದು;? | |
| ಈ | ಪದೇ ಪದೇ ರಾಜ್ಯಾದ್ಯಂತ ನಕಲಿ ಅಂಕಪಟ್ಟಿಗಳ ಹಾವಳಿ ಹೆಚ್ಚಾಗಿದ್ದು, ಈ ಬಗ್ಗೆ ಸರ್ಕಾರ ಕೈಗೊಳ್ಳಲಿರುವ ಕಠಿಣ ನಿಲುವೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | ಅಂಕಪಟ್ಟಿ ಹಾಗೂ ಪದವಿ ಪ್ರಮಾಣ ಪತ್ರಗಳನ್ನು ನಕಲಿ/ಕೃತ್ರಿಮಗೊಳಿಸುವುದನ್ನು ತಡೆಯಲು, ಈ ದಾಖಲೆಗಳನ್ನು ಡಿಜಿಟಲ್ ರೂಪದಲ್ಲಿ ಸಿದ್ಧಪಡಿಸಿದ ತರುವಾಯ **Karnataka State Data Center (KSDC)** ನಲ್ಲಿ ಶೇಖರಿಸಿ, ಪ್ರತಿಗಳನ್ನು **National Academic Depository (NAD)** ಮತ್ತು **DigiLocker** ನಲ್ಲಿ ಕಡ್ಡಾಯವಾಗಿ ಅಳವಡಿಸುವ ನಾವಿನ್ಯ ತಂತ್ರಜ್ಞಾನ ಆಧಾರಿತ ಹಾಗೂ ಅಂಕೀಯವಾಗಿ ಸುರಕ್ಷಿತವಾದ **(Digitally Secured)** ಯೋಜನೆಯನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸುವಂತೆ ಹಾಗೂ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ಮುದ್ರಿಸದಿರುವಂತೆ ಉನ್ನತ ಶಿಕ್ಷಣ ಇಲಾಖೆಯಡಿಯ ಎಲ್ಲಾ ರಾಜ್ಯ ಸಾರ್ವಜನಿಕ ವಿಶ್ವವಿದ್ಯಾನಿಲಯಗಳಿಗೆ ಸರ್ಕಾರದ ಪತ್ರ ಸಂಖ್ಯೆ: ಇಡಿ/41/ಇಜಿಬಿವಿ/2020, ದಿನಾಂಕ:04.07.2020ರಲ್ಲಿ ಸೂಚನೆಗಳನ್ನು ನೀಡಲಾಗಿದೆ. |

ಇಡಿ/361/ಯುಬಿವಿ/2021

(ಡಾ। ಅಶ್ವಥ್‌ನಾರಾಯಣ ಸಿ.ಎನ್)
ಮಾನ್ಯ ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು